# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1387

ಉತ್ತರಿಸಬೇಕಾದ ದಿನಾಂಕ : 16.03.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಸಂಘಗಳಲ್ಲಿ ಸದಸ್ಯರನ್ನು ಮುಕ್ತ ಸದಸ್ಯತ್ವದಿಂದ ವಂಚಿಸಿ, ಸದಸ್ಯರ ಮತದಾನದ ಹಕ್ಕನ್ನು ಮೊಟಕುಗೊಳಿಸುವ ಉದ್ದೇಶದಿಂದ ನಾಮಮಾತ್ರ ಸದಸ್ಯರನ್ನು ಮಾಡಿ ವ್ಯವಹರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ) | ಸಹಕಾರ ಸಂಘಗಳಲ್ಲಿ ಸದಸ್ಯತ್ವ ಅಭಿಯಾನ ಮಾಡದೆ ಆಡಳಿತ ಮಂಡಳಿಯ ಸಹಕಾರ ತತ್ವಕ್ಕೆ ವಿರುದ್ಧವಾಗಿ ಕೆಲವೇ ಮಂದಿಯನ್ನು ಸದಸ್ಯರನ್ನಾಗಿ ಮಾಡಿಕೊಂಡು ಕೆಲವೇ ಮಂದಿಗೆ ಸಾಲ-ಸೌಲಭ್ಯ ನೀಡುತ್ತಿರುವುದು ಹಾಗೂ ಕೆಲವೇ ಮಂದಿಯನ್ನು ಸದಸ್ಯರನ್ನಾಗಿ ಮಾಡಿಕೊಂಡು ಚುನಾವಣೆ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ರೀತಿಯ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದುವುದು ಸ್ವಪ್ರೇರಣೆ ಹಾಗೂ ಮುಕ್ತವಾಗಿರುತ್ತದೆ.<br><br>ಸರ್ಕಾರದ ರಿಯಾಯಿತಿ ಬಡ್ಡಿ ಧರದಲ್ಲಿ ಬೆಳೆ ಸಾಲ ವಿತರಿಸುವ ಆದೇಶಗಳಲ್ಲಿ ಶೇ.25 ರಷ್ಟು ಹೊಸ ಸದಸ್ಯರಿಗೆ ಸಾಲ ವಿತರಿಸಲು ಷರತ್ತು ವಿಧಿಸಿ ಅದರಂತೆ ಸಾಲ ವಿತರಿಸಲು ಎಲ್ಲಾ ಬ್ಯಾಂಕುಗಳಿಗೆ ತಿಳಿಸಲಾಗಿದೆ. ಇದರಿಂದಾಗಿ 2019-20ರ ಫೆಬ್ರುವರಿಯವರೆಗೆ 1.62 ಲಕ್ಷ ಹೊಸ ರೈತರಿಗೆ ಸದಸ್ಯರನ್ನಾಗಿ ಮಾಡಿಕೊಂಡು ರೂ.938.36 ಕೋಟಿ ಸಾಲ ವಿತರಿಸಿದೆ.<br><br>2020-21ನೇ ಸಾಲಿನಲ್ಲಿ ಇದೇ ಅವಧಿಗೆ 2.19 ಲಕ್ಷ ಹೊಸ ಸದಸ್ಯರಿಗೆ ರೂ.1472.00 ಕೋಟಿ ಸಾಲ ವಿತರಿಸಲಾಗಿದೆ. |
| ಇ) | ಸಹಕಾರ ಸಂಘಗಳಲ್ಲಿ ಸದಸ್ಯತ್ವ ಅಭಿಯಾನ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಕೇಂದ್ರ ಸರ್ಕಾರದ ಕೃಷಿ ಮತ್ತು ರೈತರ ಕಲ್ಯಾಣ ಇಲಾಖೆಯ ನಿರ್ದೇಶನದಂತೆ ಸಹಕಾರ ಸಂಘಗಳ ಸದಸ್ಯತ್ವ ಅಭಿಯಾನಕ್ಕೆ ದಿನಾಂಕ:1-6-2020 ರಿಂದ ಪ್ರಾರಂಭವಾಗಿ ರೈತರಿಗೆ ಸಕಾಲದಲ್ಲಿ ಸಾಲ ನೀಡಲು ಕಿಸಾನ್ ಕ್ರೆಡಿಟ್ ಕಾರ್ಡ್ ವಿತರಿಸುವ ಅಭಿಯಾನ ಚಾಲನೆಯಲ್ಲಿರುತ್ತದೆ. ಇದರಲ್ಲಿ ಕಿಸಾನ್ ಸಮ್ಮಾನ್ ಯೋಜನೆಯಲ್ಲಿ ನೋಂದಾಯಿತ ರೈತರ ಖಾತೆಗಳು ಇರುವ ಬ್ಯಾಂಕುಗಳಿಗೆ ರೈತರ ಪಟ್ಟಿಯನ್ನು ಕಳುಹಿಸಿ ಸದರಿ ಸದಸ್ಯರನ್ನು ಸಂಪರ್ಕಿಸಿ ಸಾಲ ವಿತರಿಸಲು ತಿಳಿಸಲಾಗಿರುತ್ತದೆ. ಈ ಸಾಲಿನಲ್ಲಿ ಇದುವರೆಗೆ 219601 ಹೊಸ ರೈತರಿಗೆ ಕಿಸಾನ್ ಕ್ರೆಡಿಟ್ ಕಾರ್ಡ್ ವಿತರಿಸಲಾಗಿದೆ. ಜಿಲ್ಲಾ ಸಹಕಾರ ಯೂನಿಯನ್ ಹಾಗೂ ರಾಜ್ಯ ಸಹಕಾರ ಮಹಾಮಂಡಲದ ಮೂಲಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. |

| | | |
|---|---|---|
| ಈ) | ಪ್ರಜಾಪ್ರಭುತ್ವ ವ್ಯವಸ್ಥೆ ಹಾಗೂ ಸಹಕಾರ ತತ್ವಕ್ಕೆ ವ್ಯತಿರಿಕ್ತವಾಗಿ ನಾಮನಿರ್ದೇಶಿತ ಸದಸ್ಯರನ್ನು ಸಹಕಾರ ಸಂಘಗಳ ಅಧ್ಯಕ್ಷ/ಉಪಾಧ್ಯಕ್ಷರ ಹುದ್ದೆಗೆ ಸ್ಪರ್ಧಿಸಲು ಅವಕಾಶ ಮಾಡಿಕೊಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಹಕಾರ ಸಂಘಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಡೆಯುತ್ತಿದ್ದು, ಸದರಿ ಸಹಕಾರ ಸಂಘಗಳಲ್ಲಿ ಸರ್ಕಾರದ ಷೇರು, ಸಾಲ, ಆರ್ಥಿಕ ನೆರವು ಮತ್ತು ಬ್ಯಾಂಕ್ ಗ್ಯಾರಂಟಿ, ಇವುಗಳಲ್ಲಿ ಯಾವುದಾದರೂ ಒಂದು ಇದ್ದಲ್ಲಿ ಅಂತಹ ಸಂಘದ ಆಡಳಿತ ಮಂಡಳಿಗೆ ಸರ್ಕಾರವು ಒಬ್ಬರನ್ನು ಮಾತ್ರ ತನ್ನ ಪ್ರತಿನಿಧಿಯಾಗಿ ನಾಮನಿರ್ದೇಶನ ಮಾಡಲು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 28-ಎ(4b) (1)ರ ರೀತ್ಯಾ ಅವಕಾಶ ಕಲ್ಪಿಸಿದೆ. (ಆದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಆಡಳಿತ ಮಂಡಳಿಯಲ್ಲಿ ಯಾವುದೇ ಸರ್ಕಾರದ ನಾಮನಿರ್ದೇಶನಕ್ಕೆ ಅವಕಾಶವಿರುವುದಿಲ್ಲ).<br><br>ಮೇಲ್ಕಂಡಂತೆ ನಾಮ ನಿರ್ದೇಶಿತ ಸದಸ್ಯರು ಅಧ್ಯಕ್ಷ/ಉಪಾಧ್ಯಕ್ಷರ ಹುದ್ದೆಗೆ ಸ್ಪರ್ಧಿಸಲು ಕಾಯ್ದೆಯಲ್ಲಿ ಅವಕಾಶ ಕಲ್ಪಿಸಲಾಗಿದೆ.<br><br>ಸರ್ಕಾರದ ಆರ್ಥಿಕ ನೆರವು ಇರುವ ಸಹಕಾರ ಸಂಘಗಳಿಗೆ ಮಾತ್ರ ಸರ್ಕಾರದಿಂದ ತನ್ನ ಪ್ರತಿನಿಧಿಯನ್ನಾಗಿ ಒಬ್ಬರನ್ನು ನಾಮನಿರ್ದೇಶನ ಮಾಡಲು ಕಾಯ್ದೆಯಂತೆ ಅವಕಾಶವಿದ್ದು ಅದರಂತೆ ನಾಮನಿರ್ದೇಶನ ಮಾಡುತ್ತಿರುವುದರಿಂದ ಇದು ಪ್ರಜಾಪ್ರಭುತ್ವ ವ್ಯವಸ್ಥೆ ಹಾಗೂ ಸಹಕಾರ ತತ್ವಕ್ಕೆ ವಿರುದ್ಧವಾಗಿದೆ ಎಂದು ಹೇಳುವುದು ಸರಿಯಲ್ಲ. |
| ಉ) | ಹಾಗಿದ್ದಲ್ಲಿ, ಈ ವ್ಯವಸ್ಥೆಯನ್ನು ಕೊನೆಗಾಣಿಸಿ, ಪ್ರಜಾಪ್ರಭುತ್ವ ವ್ಯವಸ್ಥೆ ಹಾಗೂ ಸಹಕಾರ ತತ್ವಕ್ಕೆ ಅನುಗುಣವಾಗಿ ಚುನಾಯಿತ ಸದಸ್ಯರಿಗೆ ಮಾತ್ರ ಆಡಳಿತ ಮಂಡಳಿ ಪದಾಧಿಕಾರಿಗಳನ್ನಾಗಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | ಪ್ರಸ್ತುತ ಸಹಕಾರ ಕಾಯ್ದೆಯಲ್ಲಿ ನಾಮ ನಿರ್ದೇಶಿತ ಸದಸ್ಯರಿಗೂ ಪದಾಧಿಕಾರಿಗಳಾಗಿ ಆಯ್ಕೆಗೊಳ್ಳಲು ಅವಕಾಶ ಕಲ್ಪಿಸಿರುವುದರಿಂದ, ಅದರಂತೆ ನಾಮನಿರ್ದೇಶಿತರು ಆಡಳಿತ ಮಂಡಳಿ ಪದಾಧಿಕಾರಿಗಳಾಗಬಹುದಾಗಿದೆ. |

**ಸಿಒ 13 ಸಿಎಲ್‌ಎಮ್ 2021 (ಇ)**

(signature)
**(ಎಸ್.ಟಿ.ಸೋಮಶೇಖರ್)**
ಸಹಕಾರ ಸಚಿವರು